

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1587
ಸದಸ್ಯರ ಹೆಸರು : ಶ್ರೀ ಗೋವಿಂದ ರಾಜು.
ಉತ್ತರಿಸಬೇಕಾದ ದಿನಾಂಕ : 24-09-2021
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಕೇಂದ್ರ ಕಛೇರಿಯಲ್ಲಿ ವಿವಿಧ ಇಲಾಖೆಯ ನಿವೃತ್ತಿ ಅಧಿಕಾರಿ/ನೌಕರರು ವಿವಿಧ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು.<br>ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಅಡಿಯಲ್ಲಿ ಒಟ್ಟು 826 ವಸತಿ ಶಾಲೆ/ಕಾಲೇಜುಗಳು ಕಾರ್ಯನಿರ್ವಹಿಸುತ್ತಿರುತ್ತವೆ. 2021-22 ನೇ ಸಾಲಿನಲ್ಲಿ ಸದರಿ ವಸತಿ ಶಾಲೆ/ ಕಾಲೇಜುಗಳಲ್ಲಿ ಹಿಂದುಳಿದ ಗ್ರಾಮೀಣ ಪ್ರತಿಭಾನ್ವಿತ 1.69 ಲಕ್ಷ ವಿದ್ಯಾರ್ಥಿ /ವಿದ್ಯಾರ್ಥಿನಿಯರುಗಳಿಗೆ ದಾಖಲಾತಿ ಮಾಡಿಕೊಳ್ಳಲು ಅವಕಾಶ ಕಲ್ಪಿಸಲಾಗಿರುತ್ತದೆ. ಮೇಲ್ಕಂಡ ವಸತಿ ಶಾಲೆ/ಕಾಲೇಜುಗಳ ಕಟ್ಟಡ ನಿರ್ಮಾಣ/ ದುರಸ್ಥಿ ಹಾಗೂ ನಿರ್ವಹಣೆ ಮಾಡಲು ಸಂಘದ ಕೇಂದ್ರ ಕಛೇರಿಯಲ್ಲಿ ತಾಂತ್ರಿಕ ವಿಭಾಗ, ಆಡಳಿತ ವಿಭಾಗ, ಯೋಜನಾ ಶಾಖೆ, ಶಿಕ್ಷಣ ಶಾಖೆ ಹಾಗೂ ಲೆಕ್ಕ ಶಾಖೆಗಳು ಕಾರ್ಯನಿರ್ವಹಿಸುತ್ತಿರುತ್ತವೆ.<br>ಸದರಿ ಶಾಖೆಗಳಲ್ಲಿ ಹೆಚ್ಚಿನ ಕಾರ್ಯ ಒತ್ತಡವಿರುವುದರಿಂದ, ಈಗಾಗಲೇ ಮಂಜೂರಾಗಿರುವ ಹುದ್ದೆಗಳಿಂದ ಸಮರ್ಪಕವಾಗಿ ಕೆಲಸ ನಿರ್ವಹಿಸಲು ಕಷ್ಟ ಸಾಧ್ಯವಾಗಿರುತ್ತದೆ.<br>ಈ ಹಿನ್ನೆಲೆಯಲ್ಲಿ 66 ನೇ ಆಡಳಿತ ಮಂಡಳಿಯ ಸಭೆಯ ತೀರ್ಮಾನದಂತೆ ಹಾಗೂ ವಸತಿ ಶಾಲೆ/ಕಾಲೇಜುಗಳ ಶೈಕ್ಷಣಿಕ ಹಾಗೂ ಆಡಳಿತಾತ್ಮಕ ಹಿತದೃಷ್ಠಿಯಿಂದ ವಯೋ ನಿವೃತ್ತಿ ಹೊಂದಿದ ಅಧಿಕಾರಿ/ನೌಕರರನ್ನು ಮುಂದುವರಿಸಲಾಗಿರುತ್ತದೆ. |
| ಆ) | ಈ ಸಂಘದ 59ನೇ ಆಡಳಿತ ಮಂಡಳಿಯ ಸಭೆಯಲ್ಲಿ 65 ವರ್ಷ ಮೇಲ್ಪಟ್ಟ ನೌಕರರನ್ನು ನೇಮಿಸಿಕೊಳ್ಳಬಾರದೆಂದು, ನೇಮಿಸಿಕೊಂಡಲ್ಲಿ ಬಿಡುಗಡೆ ಮಾಡಬೇಕೆಂದು ತೀರ್ಮಾನಿಸಿರುವುದು ನಿಜವೆ ; | |
| ಇ) | ಹಾಗಿದ್ದಲ್ಲಿ, 56 ವರ್ಷ ಮೀರಿದ್ದರೂ ಸಹ ಈ ಅಧಿಕಾರಿ/ನೌಕರರನ್ನು ಬಿಡುಗಡೆಗೊಳಿಸದಿರುವುದು ಸಂಘದ ಆಡಳಿತ ಮಂಡಳಿ ಸಭೆಯ ತೀರ್ಮಾನವನ್ನು ಉಲಂಘನೆಯಾಗುವುದಿಲ್ಲವೇ: (ವಿವರ ನೀಡುವುದು) | |
| ಈ) | ವಯೋ ನಿವೃತ್ತಿ ಅಧಿಕಾರಿ/ನೌಕರರು ಕಾರ್ಯನಿರ್ವಹಿಸುತ್ತಿರುವ ಹುದ್ದೆಗಳು ಸರ್ಕಾರದಿಂದ ಮಂಜೂರಾಗಿವೆಯೇ: (ವಿವರ ನೀಡುವುದು) | ಸಂಘದ ಕೇಂದ್ರ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ವಯೋ ನಿವೃತ್ತಿ ಹೊಂದಿದ ಅಧಿಕಾರಿ/ನೌಕರರ ಹುದ್ದೆಗಳ ವಿವರಗಳನ್ನು ಅನುಬಂಧ-1 ರಲ್ಲಿ ನೀಡಿದೆ. |

| | | |
|---|---|---|
| ಉ) | ಈ ರೀತಿ ನೇಮಕದಿಂದ ನಿರುದ್ಯೋಗಕ್ಕೆ ಪ್ರೋತ್ಸಾಹ ನೀಡದಂತಾಗುವುದಿಲ್ಲವೇ? (ವಿವರ ನೀಡುವುದು) | ಸಂಘದ ಕೇಂದ್ರ ಕಛೇರಿಗೆ ಅವಶ್ಯವಿರುವ ಹುದ್ದೆಗಳನ್ನು ನೇರ ನೇಮಕಾತಿ ಮುಖಾಂತರ ಭರ್ತಿ ಮಾಡಲು ಶೀಘ್ರವಾಗಿ ಕ್ರಮವಹಿಸಲಾಗುವುದು. |

ಸಂಖ್ಯೆ: ಸಕಇ 398 ಮೊದೇಶಾ 2021

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಮತ್ತು
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

# ಅನುಬಂಧ -1

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಗೋವಿಂದ ರಾಜು (ವಿಧಾನ ಸಭೆಯಿಂದ ಚುನಾಯಿತರಾದವರು) ಅವರ ಚುಕ್ಕೆ ರಹಿತ ಪ್ರಶ್ನೆ : 1587

**ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ಬೆಂಗಳೂರು ಇಲ್ಲಿ ಗೌರವಧನ ಆಧಾರದ ಮೇರೆಗೆ ಕಾರ್ಯನಿರ್ವಹಿಸುತ್ತಿರುವ ನಿವೃತ್ತ ಅಧಿಕಾರಿ/ನೌಕರರ ಪದನಾಮವಾರು ಹುದ್ದೆಗಳ ವಿವರಗಳು**

| ಕ್ರ ಸಂ | ಪದನಾಮ | ಮಂಜೂರಾತಿ ವಿವರಗಳು | ಷರಾ |
|---|---|---|---|
| 1 | ಶೈಕ್ಷಣಿಕ ಸಮಾಲೋಚಕರು | ಮಂಜೂರಾಗಿರುವುದಿಲ್ಲ | ಸರ್ಕಾರದ ಆದೇಶ ಸಂಖ್ಯೆ: ಸಕಇ 191 ಮೊದೇಶಾ 2019 ದಿ: 16.07.2020 ಮತ್ತು ದಿ: 29.07.2020 ರನ್ವಯ ಕಾರ್ಯನಿರ್ವಹಿಸುತ್ತಿರುತ್ತಾರೆ. |
| 2 | ಕಾನೂನು ಮಾಹಿತಿ ಅಧಿಕಾರಿ | ಮಂಜೂರಾಗಿರುವುದಿಲ್ಲ | ಸಂಘದ 66ನೇ ಆಡಳಿತ ಮಂಡಳಿ ಅನುಮೋದನೆ ಮೇರೆಗೆ ಮುಂದುವರೆದಿರುತ್ತಾರೆ. |
| 3 | ಅಧೀಕ್ಷಕರು | ಮಂಜೂರಾಗಿರುವುದಿಲ್ಲ | |
| 4 | ಸಂಯೋಜನಾಧಿಕಾರಿಗಳು | ಮಂಜೂರಾಗಿರುವುದಿಲ್ಲ | |
| 5 | ಪ್ರ.ದ.ಸ | ಮಂಜೂರಾಗಿರುತ್ತದೆ. | |
| 6 | ಲೆಕ್ಕಪರಿಶೋಧನಾಧಿಕಾರಿಗಳು | ಮಂಜೂರಾಗಿರುವುದಿಲ್ಲ | ಸರ್ಕಾರದ ಆದೇಶ ಸಂಖ್ಯೆ: ಸಕಇ 180 ಮೊದೇಶಾ 2020 ದಿ: 05.08.2020 ರನ್ವಯ ಕಾರ್ಯನಿರ್ವಹಿಸುತ್ತಿರುತ್ತಾರೆ. |
| 7 | ತಾಂತ್ರಿಕ ಸಲಹೆಗಾರರು (ಇ & ಇ) ಹಾಗೂ ನೋಡಲ್ ಅಧಿಕಾರಿ (EMRS) | ಮಂಜೂರಾಗಿರುವುದಿಲ್ಲ | ಸರ್ಕಾರದ ಆದೇಶ ಸಂಖ್ಯೆ: ಸಕಇ 52 ಮೊದೇಶಾ 2020 ದಿ: 22.05.2020 ರನ್ವಯ ಕಾರ್ಯನಿರ್ವಹಿಸುತ್ತಿರುತ್ತಾರೆ. |